ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 02ನೇ ಮಾರ್ಚ್, 2020

ಸರಕಾರಿ ವೈದ್ಯಕೀಯ ಕಾಲೇಜುಗಳ ಕುರಿತು

ಶ್ರೀ ರವಿಕುಮಾರ್. ಎನ್ (ವಿಧಾನ ಸಭೆಯಿಂದ ಚುನಾಯಿತರಾದವರು) :-

105 (03) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) 2017-18ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಲಾದ ಪೈಕಿ ಎಷ್ಟು ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲಾಗಿದೆ; ಪ್ರಾರಂಭಿಸಲು ಬಾಕಿ ಇರುವ ಕಾಲೇಜುಗಳ ಸಂಖ್ಯೆ ಎಷ್ಟು;

(ಆ) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಷ್ಟು ವೈದ್ಯಕೀಯ ಕಾಲೇಜುಗಳಿವೆ; ಮಂಗಳೂರಿನಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಬೇಕಾಗಿರುವ ಎಲ್ಲಾ ಮೂಲ ಸೌಲಭ್ಯಗಳು ಇದ್ದರೂ ಇದುವರೆಗೂ ಸರ್ಕಾರಿ ವೈದ್ಯಕೀಯ ಕಾಲೇಜು ಪ್ರಾರಂಭಿಸ ದಿರಲು ಕಾರಣಗಳೇನು; ಯಾವಾಗ ಸರ್ಕಾರಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲಾಗುವುದು; ಸರ್ಕಾರ ಖಾಸಗಿ ವೈದ್ಯಕೀಯ ಶಿಕ್ಷಣ ಸಂಸ್ಥೆಗಳ ಲಾಬಿಗೆ ಮಣಿದಿದೆಯೇ; ಈ ಕುರಿತು ಸರ್ಕಾರದ ನಿಲುವೇನು;

(ಇ) ಚಿಕ್ಕಮಗಳೂರು ಜಿಲ್ಲೆಯಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜನ್ನು ಯಾವಾಗ ಪ್ರಾರಂಭಿಸಲಾಗುವುದು;

(ಈ) 2019-20ನೇ ಶೈಕ್ಷಣಿಕ ಸಾಲಿನಲ್ಲಿ ಎಷ್ಟು ವೈದ್ಯಕೀಯ ಸೀಟುಗಳು ಲಭ್ಯವಿವೆ; ಇದರಲ್ಲಿ ಎನ್‌ಆರ್‌ಐ ಸೀಟುಗಳೆಷ್ಟು; ನೀಟ್ ಪರೀಕ್ಷೆಯ ಮೂಲಕ ತುಂಬಬಹುದಾದ ಸೀಟುಗಳೆಷ್ಟು; ಆಡಳಿತ ಮಂಡಳಿಯ ಸೀಟುಗಳೆಷ್ಟು; ಸರ್ಕಾರಿ ಸೀಟುಗಳೆಷ್ಟು? (ಕಾಲೇಜುವಾರು ವಿವರ ನೀಡುವುದು)